ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಶುಕ್ರವಾರ, ದಿನಾಂಕ : 29 ನೇ ಜನವರಿ, 2021

ಬಿ.ಎಂ.ಟಿ.ಸಿ. ಬಸ್ಸುಗಳ ನಿಲ್ದಾಣ / ತಂಗುದಾಣಗಳ ಕುರಿತು

ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು) -

06 (28) ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೇ -

(ಅ) ಬೆಂಗಳೂರು ನಗರದಲ್ಲಿ ಸಂಚಾರ ನಡೆಸಲು ಯೋಗ್ಯವಿರುವ ಬಿ.ಎಂ.ಟಿ.ಸಿ. ಬಸ್ಸುಗಳ ಸಂಖ್ಯೆ ಎಷ್ಟು; (ವಿವರ ನೀಡುವುದು)

(ಆ) ನಗರದಲ್ಲಿ ಬಸ್ಸುಗಳ ಸಂಚಾರಕ್ಕೆ ನಿಗದಿಪಡಿಸಿದ ರೂಟ್ (ಮಾರ್ಗಗಳ) ಸಂಖ್ಯೆ ಎಷ್ಟು; ಈ ಎಲ್ಲಾ ಮಾರ್ಗಗಳಲ್ಲಿ ಎಷ್ಟು ತಂಗುದಾಣಗಳಿವೆ; (ವಿವರ ನೀಡುವುದು)

(ಇ) ಬಸ್ಸುಗಳ ವಾಹನ ಚಾಲಕರು ಬಸ್ ನಿಲ್ದಾಣ/ತಂಗುದಾಣಗಳಲ್ಲಿ ಸರಿಯಾಗಿ ವಾಹನ ನಿಲುಗಡೆ ಮಾಡಿ ಇತರೆ ವಾಹನಗಳ ಸಂಚಾರಕ್ಕೆ ಅನುವು ಮಾಡುವ ಕುರಿತು ಯಾವುದಾದರೂ ಮಾನದಂಡಗಳನ್ನು ಅನುಸರಿಸಲಾಗುತ್ತಿದೆಯೇ; ಹಾಗೂ ಇದರ ಕುರಿತು ಚಾಲಕರಿಗೆ ಸೂಕ್ತ ತರಬೇತಿ ನೀಡಲಾಗಿದೆಯೇ; (ವಿವರ ನೀಡುವುದು)

(ಈ) ಬಿ.ಎಂ.ಟಿ.ಸಿ. ಬಸ್ಸುಗಳಲ್ಲಿ ಪ್ರಥಮ ಚಿಕಿತ್ಸಾ ಕಿಟ್‌ಗಳನ್ನು ಅಳವಡಿಸಲಾಗಿದೆಯೇ; (ವಿವರ ನೀಡುವುದು)

(ಉ) ಬಸ್ ನಿಲ್ದಾಣಗಳಲ್ಲಿ/ತಂಗುದಾಣಗಳಲ್ಲಿ ಸಿಸಿಟಿವಿ ಕ್ಯಾಮರಗಳನ್ನು ಅಳವಡಿಸಲಾಗಿದೆಯೇ; ಮತ್ತು ಪ್ರಯಾಣಿಕರಿಗೆ ಕುಡಿಯುವ ನೀರಿನ ವ್ಯವಸ್ಥೆ ಹಾಗೂ ಇತರೆ ಸೌಲಭ್ಯಗಳನ್ನು ಕಲ್ಪಿಸಲಾಗಿದೆಯೇ;

(ಊ) ಬಸ್‌ಗಳಲ್ಲಿ ಪ್ರಯಾಣಿಕರು ಸಂಚಾರ ನಡೆಸುವಾಗ ಕೊರೋನ ವೈರಸ್ ಹರಡುವುದನ್ನು ತಪ್ಪಿಸಲು ಮುನ್ನೆಚ್ಚರಿಕೆ ಕ್ರಮವಾಗಿ ಯಾವುದಾದರೂ ಮಾನದಂಡಗಳನ್ನು ಅಳವಡಿಸಲಾಗಿದೆಯೇ ; (ವಿವರ ನೀಡುವುದು)

(ಋ) ನಗರದಲ್ಲಿ ಎಷ್ಟು ಕಡೆ ಬಸ್-ಬೇಗಳ ನಿರ್ಮಾಣ ಮಾಡಲಾಗಿದೆ; ಮತ್ತು ಎಷ್ಟು ಕಡೆ ನಿರ್ಮಾಣ ಮಾಡಲು ಉದ್ದೇಶಿಸಲಾಗಿದೆ ; ಈ ಕುರಿತು ಬಿ.ಬಿ.ಎಂ.ಪಿ. ಜೊತೆಗೆ ಸಮನ್ವಯತೆ ಹೊಂದಲಾಗಿದೆಯೇ; (ವಿವರ ನೀಡುವುದು)

(ಋೂ) ಕಳೆದ 5 ವರ್ಷಗಳಿಂದ ನಗರದಲ್ಲಿ ಸಂಚಾರ ನಡೆಸುವ ಬಿ.ಎಂ.ಟಿ.ಸಿ. ಬಸ್ಸುಗಳಲ್ಲಿ ಮತ್ತು ಎಲ್ಲಾ ರೀತಿಯ ಬಸ್ಸು ನಿಲ್ದಾಣ/ತಂಗುದಾಣಗಳಲ್ಲಿ ಜಾಹಿರಾತು ಪ್ರದರ್ಶನದಿಂದ ಮತ್ತು ಬಿ.ಎಂ.ಟಿ.ಸಿ.ಯ ಸ್ವತ್ತಿನಲ್ಲಿ ಖಾಸಗಿಯವರಿಗೆ ಬಾಡಿಗೆ ಹಾಗೂ ಇನ್ನಿತರೆ ಮೂಲಗಳಿಂದ ಬಂದಂತಹ ಒಟ್ಟು ಆದಾಯದ ವಿವರಗಳನ್ನು ನೀಡುವುದು ಹಾಗೂ ವಿವಿಧ ಖಾಸಗಿ ವ್ಯಕ್ತಿಗಳಿಂದ ಮತ್ತು ಸಂಸ್ಥೆಗಳಿಂದ ಮಾಹೆಯಾನ ಪಡೆಯುವ ಬಾಡಿಗೆ ಎಷ್ಟು? (ಸಂಪೂರ್ಣ ವಿವರ ನೀಡುವುದು)